# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್ : 114

6ನೇ ವರ್ಷ 40 ನೇ ಸಂಚಿಕೆ ಕೊಪ್ಪ 8-5-1988 ಭಾನುವಾರ ಬೆಲೆ 25 ಪೈಸೆ




## "ಗುಬ್ಬಗದ್ದೆ ಕಾಡು ಉಳಿಸಿ"

### ಸರ್ಕಾರಕ್ಕೆ ಪಶ್ಚಿಮ ಘಟ್ಟ ಚಳುವಳಿ ನೇತಾರರ ಒತ್ತಾಯ

ಕೊಪ್ಪ : ಗುಬ್ಬಗದ್ದೆಯ 50 ಎಕರೆ ದಟ್ಟ ಕಾಡನ್ನು ಮೋಸದಿಂದ ಕಬಳಿಸಲು ಕೆಲವು ಮಂದಿ ಲಾಭ ಬಡುಕರು ಹೂಡಿರುವ ಸಂಚನ್ನು ವಿಫಲಗೊಳಿಸಿ, ಆ ಕಾಡಿನಿಂದ ಹುಟ್ಟಿ ಹರಿವ ಝರಿಯನ್ನೇ ಆಶ್ರಯಿಸಿರುವ ಬಡ ರೈತರ ಜಮೀನುಗಳನ್ನು ಉಳಿಸುವುದರ ಜೊತೆಗೆ, ಪರಿಸರ ವಿನಾಶವಾಗುವುದನ್ನು ತಡೆಗಟ್ಟಬೇಕೆಂದು "ಪಶ್ಚಿಮ ಘಟ್ಟ ಉಳಿಸಿ" ಚಳುವಳಿಯ ನೇತಾರರು ಸರ್ಕಾರವನ್ನು ಒತ್ತಾಯಿಸಿದ್ದಾರೆ (ಈ ಹೇಳಿಕೆ ಆಕಾಶವಾಣಿಯ ಪ್ರದೇಶ ಸಮಾಚಾರದಲ್ಲೂ ಮೇ 7ರಂದು ಬಿತ್ತರಗೊಂಡಿತು).

## ಕಾಡಾನೆಯಿಂದ ಬಡ ರೈತನ ಹತ್ಯೆ

ಬಾಳೆಹೊನ್ನೂರು : ಕಳಸದಿಂದ ಮಾಗುಂಡಿಗೆ ಸೈಕಲ್ಲಿ ಬರುತ್ತಿದ್ದ ಕಳಸದ ಗಜೇಂದ್ರ ಭಟ್ಟರ ಮಗ ಸದಾಶಿವ (22) ಎಂಬ ರೈತ ಯುವಕ ಕಾಡಾನೆಯ ದಾಳಿಯಿಂದಾಗಿ ದುರ್ಮರಣಕ್ಕೀಡಾಗಿದ್ದಾರೆ. ಮೇ 6ರ ಬೆಳಗ್ಗೆ 8 ಗಂಟೆ ಹೊತ್ತಿನಲ್ಲಿ ಮಾಗುಂಡಿಯಿಂದ ಸುಮಾರು 6.5 ಕಿ. ಮಿ. ಆಚೆ ಕಬ್ಬಿನಹಳ್ಳ ಪ್ರದೇಶದಲ್ಲಿ ಈ ದುರ್ಘಟನೆ ಸಂಭವಿಸಿದೆ.

ಆನೆ ಎದುರಾದಾಗ ಓಡಿದ ಸದಾಶಿವ ರಸ್ತೆ ಪಕ್ಕದ ಧರೆ ಹತ್ತಿ ತಪ್ಪಿಸಿಕೊಳ್ಳಲು ಯತ್ನಿಸುವಷ್ಟರಲ್ಲಿ ಈ ಗಂಡಾನೆ ತನ್ನ ದಂತದಿಂದ ಅವರನ್ನು ಧರೆಗೇ ತಿವಿದು ಕೊಂದಿತೆಂದೂ, ಅವರ ತಲೆಯಿಂದ ಎದೆಯವರೆಗೆ ದಂತ ಹೊಕ್ಕಿತ್ತೆಂದೂ ಹೇಳಲಾಗಿದೆ

## 'ತಾಳಿಭಾಗ್ಯ'ದಡಿ ಸಾಮೂಹಿಕ ವಿವಾಹ

(ವರದಿ : ಎಂ ಏ ಶ್ರೀನಿವಾಸಮೂರ್ತಿ)

ನ. ರಾ. ಪುರ : 'ತಾಳಿ ಭಾಗ್ಯ' ಯೋಜನೆಯಡಿ ನ ರಾ. ಪುರ ರೋಟರಿ ಸಂಸ್ಥೆ ಸಹಯೋಗದೊಡನೆ ಮೇ 7ರಂದು ನಡೆದ ಸಮಾರಂಭದಲ್ಲಿ 15 ಜೋಡಿಗಳು (12 ಪ. ಜಾತಿ, 1 ಕ್ರೈಸ್ತ, 1 ಅಂತರ್ಜಾತಿ, 1 ಒಕ್ಕಲಿಗ ಸತಿ-ಪತಿಗಳಾದರು. ಶಾಸಕ ಗೋವಿಂದ ಗೌಡರು ಉದ್ಘಾಟಿಸಿದ ಸಮಾರಂಭದಲ್ಲಿ ಜಿ. ಪ. ಸದಸ್ಯರಾದ ವಿಜಾಗಾ, ಗೀತಾ ಮತ್ತು ಜಿಲ್ಲಾ ಮಟ್ಟದ ಅಧಿಕಾರಿಗಳು ಭಾಗವಹಿಸಿದ್ದರು. ಸ್ವಾಗತ ಸಮಿತಿಯ ಮುಂದಾಳತ್ವವನ್ನು ಬಿ ಡಿ ಟಿ ಚಿನ್ನ ನಂದ ಹೆಗ್ಡಾರ್ ವಹಿಸಿದ್ದು, ಸಾವಿರಾರು ನಾಗರಿಕರು ವಧೂವರರನ್ನು ಹರಸಿ ತಮ್ಮ ಸಂತಸ ವ್ಯಕ್ತಪಡಿಸಿದರು.

---

ಕೊಪ್ಪದ ವಿಭಾಗ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಸ್ಥಳಕ್ಕೆ ಭೇಟಿ ಕೊಟ್ಟಿದ್ದು, ಮೃತರ ಕುಟುಂಬಕ್ಕೆ ಗರಿಷ್ಠ ಪರಿಹಾರಕ್ಕೆ ಶಿಫಾರ್ಸು ಮಾಡಿದ್ದಾರೆ

## ವಿವಿಧ ಇಲಾಖೆಗಳ ವಸ್ತು ಪ್ರದರ್ಶನ

ಉದುರೆಗುಂಡಿ: ಇಲ್ಲಿ ಏ. 30ರಂದು ನಡೆದ ವಿನಾಯಕ ಯುವಕ ಸಂಘದ 18 ನೇ ವಾರ್ಷಿಕೋತ್ಸವದ ಸಂದರ್ಭದಲ್ಲಿ ಕೊಪ್ಪದ ಕೃಷಿ, ರೇಷ್ಮೆ, ಆರೋಗ್ಯ ಮತ್ತು ಕ್ಷೇತ್ರಾಭಿವೃದ್ಧಿ ಇಲಾಖೆಗಳು ವಸ್ತು ಪ್ರದರ್ಶನ ಏರ್ಪಡಿಸಿದ್ದವು. ಮನಮೋಹನ ಕಿಳ್ಳೆಯವರ ಅಧ್ಯಕ್ಷತೆಯಲ್ಲಿ ಮಂಡಲ ಪ್ರಧಾನ ವಸಂತ ಅಜಿಲ ವಸ್ತು ಪ್ರದರ್ಶನ ಉದ್ಘಾಟಿಸಿದರು.

ಸ॥ ಕೃಷಿ ನಿರ್ದೇಶಕ ಎ. ಎಂ. ಅನಂತರಾಜ್, ಹಿರಿಯ ರೇಷ್ಮೆ ನಿರೀಕ್ಷಕ ಶಕೀಲ್ ಅಹಮದ್, ವೈದ್ಯಾಧಿಕಾರಿ ಡಾ॥ ಬಿ. ಜಿ. ಪ್ರಸಾದ್ ತಂತಮ್ಮ ಇಲಾಖೆಗಳ ಬಗ್ಗೆ ತಜ್ಞ ಭಾಷಣ ಮಾಡಿದರು. ಸಂಜೆ ಕಪಿಲಾ ಮಹಿಳಾ ಸಮಾಜ, ಕೀರ್ತಿ ಯುವತಿ ಮಂಡಳಿಗಳ ವಾರ್ಷಿಕೋತ್ಸವ ಸುಮಿತ್ರಮ್ಮ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಮೇ 1 ರಂದು ಬಿ.ಜಿ. ಚಿದಂಬರ್ ಅಧ್ಯಕ್ಷತೆಯಲ್ಲಿ ನಡೆದ ಸಮಾರೋಪ ಸಮಾರಂಭದಲ್ಲಿ ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ಬಹುಮಾನ ವಿತರಣೆ ಮಾಡಿದರು. ಮಂಡಲ ಪ್ರಧಾನ ಗೋಪಾಲರಾವ್ ಅತಿಥಿಯಾಗಿದ್ದರು.

ಕೊನೆಯಲ್ಲಿ ಯುವಕ ಸಂಘದಿಂದ ಉತ್ತಮ ನಾಟಕ ಪ್ರದರ್ಶನ ನಡೆಯಿತು.

(ವರದಿ : ಕ. ಸು. ರಾಮಚಂದ್ರ)

## ಮನೆ ಮಾಲೀಕರಿಂದ ಬಾಡಿಗೆದಾರನಿಗೆ ಕಿರುಕುಳ

ಜಯಪುರ : ಇಲ್ಲಿನ ಮನೆ ಬಾಡಿಗೆದಾರ ಎಸ್. ಪುರುಷೋತ್ತಮ ಶೆಟ್ಟಿ ಎಂಬವರ ಮನೆಗೆ ಮಾಲೀಕರಾದ ಶೇಷಯ್ಯ ಎಂಬವರು ನುಗ್ಗಿ ಶೆಟ್ಟರು ಮನೆಯಲ್ಲಿ ಇಲ್ಲದ ಸಮಯದಲ್ಲಿ ಮನೆ ಬಾಗಿಲುಗಳನ್ನು ಗಾಡಿಯಲ್ಲಿ ತುಂಬಿಸಿ ಹೊತ್ತುಕೊಂಡು ಹೋಗಿ ಮಾಧವ ಪೂಜಾರಿ ಎಂಬವರ ಮನೆಯಲ್ಲಿ ಬಾಗಿಲ ಹಲಗೆಗಳನ್ನು ಖಾಲಿ ಮಾಡುತ್ತಿದ್ದಾಗ ಪೋಲೀಸ್ ದಫೇದಾರರು ಹಾಗೂ ಸ್ಥಳೀಯ ಜನರು ಹಿಡಿದು ಛೀಮಾರಿ ಹಾಕಿ ಬಾಗಿಲುಗಳನ್ನು ಅವರಿಂದಲೇ ಜೋಡಿಸಿ ಮನೆಯನ್ನು ತೆರೆಸಿದರು. ಈ ಬಗ್ಗೆ ಬಾಳೆಹೊನ್ನೂರು ಸಬ್ ಇನ್‌ಸ್ಪೆಕ್ಟರ್‌ರವರಿಗೆ ದೂರು ನೀಡಿರುವುದಾಗಿ ತಿಳಿದು ಬಂದಿದೆ. ಈ ಮನೆಯ ಬಗ್ಗೆ ಕೋರ್ಟಿನಲ್ಲಿ ವ್ಯಾಜ್ಯ ನಡೆಯುತ್ತಿದೆ.

## ಕೆಲ ಪ್ರೌಢಶಾಲೆಗಳ ಎಸ್ಸೆಸ್ಸೆಲ್ಸಿ ಫಲಿತಾಂಶ

ಶೃಂಗೇರಿ : ಇಲ್ಲಿನ ಅಭಿನವ ವಿದ್ಯಾತೀರ್ಥ ಬಾಲಿಕಾ ಪ್ರೌಢಶಾಲೆಯ ಕು॥ ಪ್ರಣೀತಾ ಈ ಬಾರಿಯ ಎಸ್ಸೆಸ್ಸೆಲ್ಸಿ ಪರೀಕ್ಷೆಯಲ್ಲಿ 15ನೇ ರ್‍ಯಾಂಕ್ ಪಡೆದಿದ್ದಾಳೆ. ಆ ಶಾಲೆಯ ಫಲಿತಾಂಶ ಶೇ. 97, ಕಿಗ 63, ನಾರ್ವೆ 71, ಶೃಂಗೇರಿ ಸ॥ ಪ್ರೌಢಶಾಲೆ 54 ಫಲಿತಾಂಶ ಪಡೆದಿವೆ.

ಸದ್ಗುರು ಪ್ರೌಢಶಾಲೆ, ಬಸರೀಕಟ್ಟೆ : ಶೇ. 79 (14 ಪ್ರಥಮ ಶ್ರೇಣಿ); ಅಗಳಗಂಡಿ ಸರ್ಕಾರಿ ಪ್ರೌಢಶಾಲೆ : ಶೇ. 72; ಜಯಪುರ ಪ್ರೌಢಶಾಲೆ : ಶೇ. 45; ಹೇರೂರು ಶೇ. 65.

## "ಸತ್ಯಕ್ಕೆ ದೂರವಾದ ಆರೋಪ"

### ಓದುಗರ ಪತ್ರ

ಮಾನ್ಯರೆ,

ನಿಮ್ಮ ಪತ್ರಿಕೆಯ 1.5 88ರ ಸಂಚಿಕೆಯಲ್ಲಿ ಬಂದ 'ವಿದ್ಯುಚ್ಛಕ್ತಿ ಕಂಟ್ರಾಕ್ಟರ್ ಎಂದು ಹೇಳಿ ಮೋಸ'.... ಎಂಬ ಪತ್ರಕ್ಕೆ ಸ್ಪಷ್ಟನೆ

ಕೊಪ್ಪದಲ್ಲಿರುವ ಏಳೆಂಟು ಮಂದಿ ಎಲೆಕ್ಟ್ರಿಕ್ ಉಪ ಗುತ್ತಿಗೆದಾರರಂತೆಯೇ ನಾನೂ ಕೂಡ ಬೇರೊಬ್ಬ ಲೈಸೆನ್ಸ್ಡ್ ಗುತ್ತಿಗೆದಾರರ ಒಪ್ಪಿಗೆ ಪಡೆದೇ ಕಳೆದ 3 ವರ್ಷದಿಂದ ಕೊಪ್ಪದಲ್ಲಿ ಕೆಲಸ ಮಾಡುತ್ತಿದ್ದೇನೆ. ನನಗೆ ಈ ವೃತ್ತಿಯಲ್ಲಿ 8 ವರ್ಷಗಳ ಉತ್ತಮ ಪರಿಶ್ರಮವಿದೆ. ಬೇರೆಯವರಂತೆಯೇ ನಾನೂ ಲೆಟರ್‌ಹೆಡ್ ಮಾಡಿಸಿದ್ದರೆ ತಪ್ಪೇನಿಲ್ಲ. ನಾನೇ ಲೈ॥ ಗುತ್ತಿಗೆದಾರನೆಂದು ಎಲ್ಲೂ ಹೇಳಿಕೊಂಡಿಲ್ಲ.

ಯಾವ ಗಿರಾಕಿಯೂ ಪೂರ್ತಿ ಹಣವನ್ನು ಮುಂಗಡವಾಗಿ ಕೊಡುವುದಿಲ್ಲ. ಆದ್ದರಿಂದ ಪತ್ರದಲ್ಲಿ ತಿಳಿಸಿರುವಂತೆ ಈ ರೀತಿ ಮೋಸ ಮಾಡುತ್ತೇನೆಂಬ ಆರೋಪ ಹುರುಳಿಲ್ಲದ್ದು. ಆದ ಕೆಲಸಕ್ಕೆ ತಕ್ಕಂತೆ ಹಂತ ಹಂತವಾಗಿ ಹಣ ಕೊಡಬೇಕಾದ್ದು ಮಾಲೀಕರ ಜವಾಬ್ದಾರಿಯಾಗುತ್ತದೆ. ಆದರೆ ಕೆಲವರು ಹಾಗೆ ಮಾಡದೆ, ಸತಾಯಿಸತೊಡಗಿದಾಗ, ನಾವೂ ನಮ್ಮ ಕೆಲಸಗಾರರಿಗೆ ಸಂಬಳ ಕೊಟ್ಟು ಕೆಲಸ ಮಾಡಿಸಬೇಕಿರುವುದರಿಂದ, ಇಂಥವರ ಕೆಲಸ ವಿಳಂಬವಾಗುವುದು ಅನಿವಾರ್ಯವಾಗುತ್ತದೆ. ಎಲ್ಲಾ ಕಂಟ್ರಾಕ್ಟರರ ಪರಿಸ್ಥಿತಿಯೂ ಇದೇ ಆಗಿರುತ್ತದೆ. ಆಗ ಮಾಲೀಕರಿಗೆ ಅನಾನುಕೂಲವಾದರೆ ಅದರಲ್ಲಿ ಅವರ ಹೊಣೆಯೇ ಹೆಚ್ಚು. ಆದಾಗ್ಯೂ ಅವರು ತಮ್ಮ ತಪ್ಪನ್ನು ಮುಚ್ಚಿಟ್ಟು ನಮ್ಮಂಥ ಬಡಪಾಯಿಗಳ ಮೇಲೆ ಹೀಗೆ ತಪ್ಪು ಹೊರಿಸಿ, ತಮ್ಮ ಬಾಯಿ ಬಲ (ಬರಹ ಬಲ) ದಿಂದ ನಮ್ಮ ಹೊಟ್ಟೆಯ ಮೇಲೆ ಹೊಡೆಯಲು ಬರುತ್ತಾರೆ. ಅವರಲ್ಲಿ ಬಹುಪಾಲು ಸ್ವಾರ್ಥವೂ ಆಗಿರಬಹುದು. ಈಗಿನ ಈ ಆರೋಪವೂ

(ಎರಡನೆ ಪುಟಕ್ಕೆ)

# "ಸತ್ಯಕ್ಕೆ ದೂರವಾದ ಆರೋಪ"

(ಮೊದಲ ಪುಟದಿಂದ)

ಅಂಥದೇ ಒಂದೂ ಎಂದು ನಾನು ದೃಢವಾಗಿ ಹೇಳುತ್ತೇನೆ.

ಏಕೆಂದರೆ ಈವರೆಗೆ ಕೊಪ್ಪ-ಶೃಂಗೇರಿಗಳಲ್ಲಿ ನಾನು 30ಕ್ಕೂ ಹೆಚ್ಚು ಕಡೆ ಕೆಲಸ ಮಾಡಿದ್ದೇನೆ. ಆ ಪೈಕಿ ಇಂಥ ಕಿರಿಕಿರಿಯ ಆರೇಳು ಪ್ರಕರಣಗಳನ್ನು ಬಿಟ್ಟರೆ ಮತ್ತೆಲ್ಲೂ ಇಂಥ ಸಂದರ್ಭ ಬಂದಿಲ್ಲ. ಈ ಆರೇಳು ಪ್ರಕರಣಗಳಲ್ಲೂ ಅವರಿಂದಲೇ ನನಗೆ ಇನ್ನೂ ಬಾಕಿಯಿದೆಯೇ ಹೊರತು, ಪಡೆದ ಹಣಕ್ಕಿಂತ ಕಡಿಮೆ ಕೆಲಸ ಎಲ್ಲೂ ಮಾಡಿಲ್ಲ. ಇಂಥ ಅಡಚಣೆ, ಕಿರಿಕಿರಿಗಳಿಲ್ಲದ ಬೇರೆಲ್ಲ ಕಡೆಯೂ ಹೇಳಿದ ಸಮಯಕ್ಕೆ ಸರಿಯಾಗಿ ಕೆಲಸ ಪೂರೈಸಿಕೊಟ್ಟಿದ್ದೇನೆ.

ಕೆಲಸ ತಡವಾಗುವುದಕ್ಕೆ ಇನ್ನೊಂದು ಕಾರಣವೆಂದರೆ, ಕಂಬ ಹಾಕುವುದು ಮುಂತಾದ ಕೆಲಸಗಳಿದ್ದಲ್ಲಿ ಕ.ವಿ. ಮಂಡಳಿಯಿಂದ ಮಂಜೂರಾತಿಯಂಥ ಕೆಲವು ಕೆಲಸಗಳಿದ್ದು, ಅದಕ್ಕಾಗಿ ಆರಂಭದಲ್ಲೇ ಗಿರಾಕಿಗಳಿಂದ ನಾವು ಅರ್ಜಿ ಕೊಡಿಸಿದ್ದರೂ, ಕಛೇರಿಯಲ್ಲಿ ಅರ್ಜಿಗಳ ಸೀನಿಯಾರಿಟಿ ವ್ಯವಸ್ಥೆಯಿಂದಾಗಿ ಸ್ವಲ್ಪ ತಡವಾಗುವುದು ಅನಿವಾರ್ಯವಿರುತ್ತದೆ. ಇದನ್ನು ಅರ್ಥಮಾಡಿಕೊಳ್ಳಲಾರದ ಕೆಲವು ಗಿರಾಕಿಗಳು ನಮ್ಮನ್ನೇ ದೂರುವುದಿದೆ.

ಅಂಗಡಿಗಳಿಂದ ಸಾಮಗ್ರಿ ಸಾಲವಾಗಿ ಪಡೆಯುವುದು ಬಹುತೇಕ ಎಲ್ಲ ಕೆಲಸಗಾರರೂ ಅನುಸರಿಸುವ ವಿಧಾನವೇ. ನಮಗೆ ಹಣ ಪಾವತಿ ಆದ ಹಾಗೆ ಅವರಿಗೂ ಚುಕ್ತಾ ಮಾಡುತ್ತಿರುತ್ತೇವೆ. ಕೊಪ್ಪದ ಒಂದು ಚಿಕ್ಕ ಎಲೆಕ್ಟ್ರಿಕ್ ಅಂಗಡಿಯಲ್ಲಿ, ಪರಸ್ಪರ ಕೊಡು ಕೊಳ್ಳುವ ಲೆಕ್ಕಾಚಾರದಲ್ಲಿದ್ದ ಸಣ್ಣ ಗೊಂದಲದಿಂದ ಸ್ವಲ್ಪ ತಡವಾಯಿತೇ ವಿನಃ ಮೋಸದ ಉದ್ದೇಶದಿಂದಂತೂ ಖಂಡಿತಾ ಅಲ್ಲ.

ಆದ್ದರಿಂದ ಮೇಲ್ಕಂಡ ಪತ್ರದಲ್ಲಿ ನನ್ನ ಮೇಲೆ ಬರೆದ ಆರೋಪಗಳು ಸತ್ಯಕ್ಕೆ ದೂರವಾಗಿವೆ. ನಾನೆಲ್ಲೂ ವಂಚನೆ ಮಾಡಿಲ್ಲ.

ಗಿರಾಕಿಗಳು ಈವರೆಗಿನ ನನ್ನ ಕೆಲಸದ ಗುಣಮಟ್ಟ, ನಾನು ಬಳಸುವ ಸಾಮಗ್ರಿಗಳ ಶ್ರೇಷ್ಠತೆ ಮತ್ತು ಸಮಯ ನಿಷ್ಠೆಯನ್ನು ಪರಿಶೀಲಿಸದೆ ಕೇವಲ ಈ ಆರೋಪಗಳನ್ನು ಮಾತ್ರ ನಂಬಿ ತೀರ್ಮಾನ ತೆಗೆದುಕೊಳ್ಳಬಾರದಾಗಿ ಕೇಳಿಕೊಳ್ಳುತ್ತಿದ್ದೇನೆ.

—ಜಿ. ದಯಾಕರ,
ವಿದ್ಯುಚ್ಛಕ್ತಿ ಉಪ ಗುತ್ತಿಗೆದಾರ, ಕೊಪ್ಪ

---

ಶಿವಮೊಗ್ಗದ ಮಂಡಿ ಪೇಟೆಯಲ್ಲಿ ಮುಷ್ಕರದ ಕಾರಣ ಅಡಿಕೆ ವ್ಯಾಪಾರ ಸ್ಥಗಿತಗೊಂಡಿದೆ ಎಂದು ತಿಳಿದು ಬಂದಿದೆ.

## ಏಲಕ್ಕಿ ಧಾರಣೆ

**ಸಕಲೇಶಪುರ 5-5-1988**

ಆರಿಸಿದ್ದು ರೂ. 200ರಿಂದ 220; ಜರಡಿ ರೂ. 160ರಿಂದ 180; ಉತ್ತಮ ರಾಶಿ ರೂ. 145ರಿಂದ 160; ರಾಶಿ ರೂ 130ರಿಂದ 140; ಕೊಳೆ ರೂ. 110 ರಿಂದ 115.

**ಮಂಗಳೂರು 7.5.1988**

ಏಲಕ್ಕಿ : 130 - 150

---

## ಗಂಧ ಸಹಿತ ಲಾರಿ ವಶ : ಮೂವರ ಬಂಧನ

ಬಾಳೆಹೊನ್ನೂರು: ಸುಮಾರು ಒಂದೂವರೆ ಲಕ್ಷ ರೂ. ಬೆಲೆ ಬಾಳುವ 1450 ಕಿಲೋ ಗಂಧ ಸಾಗಿಸುತ್ತಿದ್ದ, ಬೆಂಗಳೂರಿನ ದೆಸ್ನಲಾದ ಲಾರಿಯನ್ನು ಈಚೆಗೆ ಇಲ್ಲಿಗೆ ಸಮೀಪ ವಲಯ ಅರಣ್ಯಾಧಿಕಾರಿ ಧರ್ಮಪಾಲ್ ಮತ್ತು ಸಿಬ್ಬಂದಿ ವಶಪಡಿಸಿಕೊಂಡು ಡ್ರೈವರ್ ಸಹಿತ ಮೂವರನ್ನು ಬಂಧಿಸಿದ್ದಾರೆ. ಮೊಕದ್ದಮೆ ನಡೆಯುತ್ತಿದೆ.

---



---

## ಕ ರ್ನಾ ಟ ಕ ಅ ರ ಣ್ಯ ಇ ಲಾ ಖೆ

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಕೊಪ್ಪ ವಿಭಾಗ ಕೊಪ್ಪ**

# ಸಂಕ್ಷಿಪ್ತ ಹರಾಜು ಪ್ರಕಟಣೆ

ಸಂಖ್ಯೆ/ಬಿ1. ಹರಾಜು ಅ. ತ./ಕ. ಸ. 1/88-89 ತಾ|| 28—4—1988

**ವಿಷಯ : ಕೊಪ್ಪ ಅರಣ್ಯ ವಿಭಾಗದ ಹಲವಾರು ಅರಣ್ಯ ವಲಯಗಳಲ್ಲಿ ಮುಟ್ಟುಗೋಲು ಹಾಕಿಕೊಂಡ ಅರಣ್ಯ ತಕ್ಷೀರಿನ ಮರ ಮುಟ್ಟುಗಳನ್ನು ಬಹಿರಂಗ ಹರಾಜು ಹಾಕುವ ಬಗ್ಗೆ.**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿದ ನಾಟ ಡಿಪೋ/ ವಲಯ ಅರಣ್ಯಾಧಿಕಾರಿಗಳ ಕಛೇರಿ ಕಾಂಪೌಂಡಿನಲ್ಲಿ ಲಾಟು ಮಾಡಿದ ಅರಣ್ಯ ತಕ್ಷೀರಿನಲ್ಲಿ ಮುಟ್ಟುಗೋಲು ಹಾಕಿಕೊಂಡ ನಾಟ ಮತ್ತಿತರ ಅರಣ್ಯ ಉತ್ಪನ್ನಗಳನ್ನು ಅನುಸೂಚಿಯಲ್ಲಿ ನಮೂದಿಸಿದ ತಾರೀಖಿನಂದು ಮತ್ತು ಸಮಯದಲ್ಲಿ ಬಹಿರಂಗ ಹರಾಜು ಮೂಲಕ ಮಾರಾಟ ಮಾಡಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರಾಗಲಿ ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಈ ಕಛೇರಿಯ ಸವಿಸ್ತಾರ ಮಾರಾಟ ಅಧಿಸೂಚನೆ ತಾ|| 28-4-88ರಲ್ಲಿ ನಮೂದಿಸಿದ ಷರತ್ತುಗಳ ರೀತ್ಯಾ ಹರಾಜನ್ನು ನಡೆಸಲಾಗುತ್ತದೆ. ಇಚ್ಛೆಯುಳ್ಳವರು ನಿಗದಿತ ಹಣ ಕಟ್ಟಿ ಭಾಗವಹಿಸಬಹುದಾಗಿದೆ. ಹೆಚ್ಚಿನ ವಿವರಗಳನ್ನು ಈ ಕಾರ್ಯಾಲಯದ ಕೆಲಸದ ವೇಳೆಯಲ್ಲಿ ಪಡೆಯಬಹುದು.

—: ಅ ನು ಸೂ ಚಿ :—

| ಕ್ರ. ಸಂ. | ನಾಟಾ ಡಿಪೋ/ವಲಯ ಅರಣ್ಯಾಧಿಕಾರಿಗಳವರ ಕಛೇರಿ ಆವರಣ | ಹರಾಜು ಮಾಡುವ ನಾಟಾದ ವಿವರ | ದಿನಾಂಕ |
|---|---|---|---|
| 1. | ಕೊಪ್ಪ ಡಿಪೋ, ಕೊಪ್ಪ | ಬೀಟೆ 8-1. 317 ಘ ಮೀ. | 19-5-88 |
| | | ಬೀಟೆ ಸೈಜುಗಳು 34/0.542 " | ಬೆಳಗ್ಗೆ |
| | | ರಂಜ 14/1 843 " | ಘಂಟೆ 9 ಕ್ಕೆ |
| | | ಹೊನ್ನೆ 57 ಸೈಜುಗಳು 1 327 " | |
| | | ಹೆಬ್ಬಲಸು 28/ 0.695 | |
| | | ಸಂಪಿಗೆ ಹಲಗೆ 19/0.171 | |
| | | ಮತ್ತಿ ಸೈಜುಗಳು 14/0.165 " | |
| | | ಸಾಗುವಾನಿ ದಿಮ್ಮಿ 7/0.723 | |
| | | ಸೌದೆ 15/840 ಎಂ3 | |
| | | ಉದ್ದ ಗರಗಸ 16 ಸಂಖ್ಯೆ | |
| | | ಅಡ್ಡಮುರಿ 6 ಸಂಖ್ಯೆ | |
| | | ಕೈ ಗರಗಸ 1 ಸಂಖ್ಯೆ | |
| 2. | ಶೃಂಗೇರಿ ಡಿಪೋ, ಶೃಂಗೇರಿ | ರಂಜ 0 292 ಎಂ3 | 19-5-88 |
| | | ಬೆಳ್ಳಾಲೆ 1 417 | ಮಧ್ಯಾಹ್ನ 2-00 |
| | | ಮತ್ತಿ ಸೈಜು 0.214 | |
| | | ಬಲಗಿ 1.737 | |
| | | ಹೆಬ್ಬಲಸು 0 760 | |
| | | ಇತರೆ 5.044 | |
| 3. | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ, ನರಸಿಂಹರಾಜಪುರ | ಬೀಟೆ ದಿಮ್ಮಿ 16/2 032 ಎಂ3 | 20-5-88 |
| | | ಬೀಟೆ ಸೈಜುಗಳು 33/0.599 " | ಬೆಳಗ್ಗೆ |
| | | ಸಾಗುವಾನಿ ದಿಮ್ಮಿ 26/2 383 " | 9-00 |
| | | ಸಾಗುವಾನಿ ಪೋಲ್ 15 ಸಂಖ್ಯೆ | |
| | | ಸಾಗುವಾನಿ ಸೈಜುಗಳು 11/0.472 " | |
| | | ಹೊನ್ನೆ ಸೈಜುಗಳು 2/0.072 | |
| | | ಕಾಡುಜಾತಿ ಪೋಲ್ಸ್ 25 ಸಂಖ್ಯೆ | |
| | | ಕಾಡುಜಾತಿ ಬಳ್ಳಿಗಳು 19 " | |
| | | ಕಾಡುಜಾತಿ ಸೈಜ್ ಹಾಗೂ ಹಲಗೆಗಳು 6/0.049 ಘ ಮೀ. | |
| | | ಹೊನ್ನೆ 15/1.371 " | |
| | | ಮತ್ತಿ 9/1414 | |
| | | ಬೀಟೆ ಮಂಚ 0. 129 | |
| | | ಇದ್ದಿಲು 5 ಚೀಲ | |
| 4. | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ, ಚಿಕ್ಕಗ್ರಹಾರ | ನಂದಿ ಸೈಜಸ್ 95/1 695ಘ.ಮೀ. | 20.5.88 |
| | | ಮತ್ತು ಹಲಗೆ | ಮ. 2-00ಘಂಟೆ |
| | | ಹೊನ್ನೆ ಸೈಜಸ್ 23/0.278 " | |
| | | ಬೀಟೆ ಸೈಜಸ್ 57/0.778 " | |
| | | ಹುನಾಲೆ ಸೈಜಸ್ 25/0.729 " | |
| | | ಬೂರುಗ 3/0.668 " | |
| 5. | ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣ, ಬಾಳೆಹೊನ್ನೂರು | ಸಾಗುವಾನಿ ದಿಮ್ಮಿ 33/4.468 " | 21.5.88 |
| | | ಹೆಬ್ಬಲಸು 1/1 968" | 9ಘಂಟೆಗೆ |
| | | ಸಂಪಿಗೆ ದಿಮ್ಮಿ 3/0.504 | |
| | | ಹೆಬ್ಬಲಸು ಸೈಜಸ್ 21/0.828 | |
| | | ನಂದಿ ಸೈಜ್ ಮತ್ತು ಹಲಗೆ 24/1.027 | |
| | | ಬೀಟೆ ಸೈಜಸ್ 19/0.368 " | |
| | | ಸಾಗುವಾನಿ ಬಳ್ಳಿಗಳು 7 ಸಂಖ್ಯೆ | |
| | | ಸೌದೆ 30.000 ಘ. ಮೀ | |

(ಸಹಿ) **ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೊಪ್ಪ**

**ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್; ಅಚ್ಚು : ದೀಪಟಿಗೆ ಅಚ್ಚು ಕೂಟ, ಕೊಪ್ಪ.**